# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 296
ಸದಸ್ಯರ ಹೆಸರು : ಶ್ರೀ ಕಾಂತರಾಜ್ (ಬಿಎಂಎಲ್)
(ಸ್ಥಳೀಯ ಸಂಸ್ಥೆಗಳ ಕ್ಷೇತ್ರ)
ಉತ್ತರಿಸುವ ದಿನಾಂಕ : 04-03-2020
ಉತ್ತರಿಸುವ ಸಚಿವರು : ಕಂದಾಯ ಸಚಿವರು

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ ಒಟ್ಟು ಎಷ್ಟು ಎಕರೆ ಸರ್ಕಾರಿ ಜಮೀನು ಇದೆ; (ಜಿಲ್ಲಾವಾರು ವಿವರ ನೀಡುವುದು) | ರಾಜ್ಯದಲ್ಲಿ ಒಟ್ಟು 6062333.15 ಎಕರೆ/ಗುಂಟೆ ಸರ್ಕಾರಿ ಜಮೀನು ಇರುತ್ತದೆ. ಜಿಲ್ಲಾವಾರು ವಿವರವನ್ನು **ಅನುಬಂಧ-1ರಲ್ಲಿ** ನೀಡಲಾಗಿದೆ. |
| ಆ) | ಈ ಸರ್ಕಾರಿ ಜಮೀನನ್ನು ಒತ್ತುವರಿ ಮಾಡಿಕೊಂಡಿರುವವರ ಸಂಖ್ಯೆ ಎಷ್ಟು; ಎಷ್ಟು ಎಕರೆ ಸರ್ಕಾರಿ ಜಮೀನನ್ನು ಒತ್ತುವರಿ ಮಾಡಿಕೊಳ್ಳಲಾಗಿದೆ (ಜಿಲ್ಲಾವಾರು ವಿವರ ನೀಡುವುದು) | ಸರ್ಕಾರಿ ಜಮೀನನ್ನು ಒತ್ತುವರಿ ಮಾಡಿಕೊಂಡಿರುವವರ ಸಂಖ್ಯೆ: 228672 ಆಗಿರುತ್ತದೆ. ಒಟ್ಟು 459558.27.11 ಎಕರೆ/ಗುಂಟೆ ಸರ್ಕಾರಿ ಜಮೀನು ಒತ್ತುವರಿಯಾಗಿದೆ. ಜಿಲ್ಲಾವಾರು ವಿವರವನ್ನು **ಅನುಬಂಧ-1ರಲ್ಲಿ** ನೀಡಲಾಗಿದೆ. |
| ಇ) | ಸರ್ಕಾರಿ ಜಮೀನನ್ನು ಒತ್ತುವರಿದಾರರಿಂದ ತೆರವುಗೊಳಿಸಲು ಸರ್ಕಾರ ಕೈಗೊಂಡಿರುವ ಕ್ರಮಗಳೇನು; (ವಿವರ ನೀಡುವುದು) | ಸರ್ಕಾರಿ ಜಮೀನಿನ ಒತ್ತುವರಿಯನ್ನು ತೆರವುಗೊಳಿಸಲು ಜಿಲ್ಲಾ ಮಟ್ಟದಲ್ಲಿ ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ ಕಾರ್ಯಪಡೆಗಳನ್ನು ರಚಿಸಲಾಗಿದೆ.<br><br>ಒತ್ತುವರಿ ಪ್ರಕರಣಗಳನ್ನು ತಡೆಯುವ ಮತ್ತು ಒತ್ತುವರಿಯನ್ನು ತೆರವುಗೊಳಿಸುವ ಉದ್ದೇಶದಿಂದ ದಿನಾಂಕ: 10/08/2015ರಂದು ಕರ್ನಾಟಕ ಭೂ ಕಬಳಿಕೆ ನಿಷೇಧ ವಿಶೇಷ ನ್ಯಾಯಾಲಯವನ್ನು ರಚಿಸಲಾಗಿದ್ದು, ದಿನಾಂಕ:31/08/2016ರಿಂದ ಸದರಿ ನ್ಯಾಯಾಲಯವು ಕಾರ್ಯನಿರ್ವಹಿಸುತ್ತಿದೆ.<br><br>ರಾಜ್ಯದಲ್ಲಿರುವ ಸರ್ಕಾರಿ ಜಮೀನುಗಳ ಒತ್ತುವರಿ ತೆರವುಗೊಳಿಸಲು ಹಾಗೂ ಸಂರಕ್ಷಿಸಲು "ಸರ್ಕಾರಿ ಜಮೀನುಗಳ ಸಂರಕ್ಷಣಾ ಸಮಿತಿ"ಯನ್ನು ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 15 ಎಲ್‌ಜಿಪಿ 2020, ದಿನಾಂಕ:29/01/2020ರ ಮೂಲಕ ರಚಿಸಲಾಗಿದ್ದು, ಸಮಿತಿಗೆ ಅಗತ್ಯ ಅಧಿಕಾರವನ್ನು ಪ್ರತ್ಯಾಯೋಜಿಸಲಾಗಿದೆ. |
| ಈ) | ತುಮಕೂರು ಜಿಲ್ಲೆಯಲ್ಲಿ ಎಷ್ಟು ಎಕರೆ ಸರ್ಕಾರಿ ಜಮೀನಿದೆ; (ತಾಲ್ಲೂಕುವಾರು ವಿವರ ನೀಡುವುದು) | ಭೂಮಿ ತಂತ್ರಾಂಶದಲ್ಲಿ ಲಭ್ಯವಿರುವ ಮಾಹಿತಿಯಂತೆ, ತುಮಕೂರು ಜಿಲ್ಲೆಯಲ್ಲಿನ ಸರ್ಕಾರಿ ಜಮೀನಿನ ತಾಲ್ಲೂಕುವಾರು ವಿವರ ಈ ಕೆಳಕಂಡಂತಿದೆ. |

| ಕ್ರ.ಸಂ. | ತಾಲ್ಲೂಕು | ವಿಸ್ತೀರ್ಣ |
|---|---|---|
| 1. | ತುಮಕೂರು | 49543.00 |
| 2. | ಗುಬ್ಬಿ | 113539.00 |
| 3. | ಕುಣಿಗಲ್ | 64264.00 |
| 4. | ತಿಪಟೂರು | 32708.00 |
| 5. | ತುರುವೇಕೆರೆ | 37907.00 |
| 6. | ಚಿಕ್ಕನಾಯಕನಹಳ್ಳಿ | 80441.00 |
| 7. | ಮಧುಗಿರಿ | 72012.00 |
| 8. | ಕೊರಟಗೆರೆ | 38963.00 |
| 9. | ಶಿರಾ | 93661.00 |
| 10. | ಪಾವಗಡ | 50060.00 |
| | ಒಟ್ಟು | 633098.00 |

| | | |
|---|---|---|
| ಉ) | ಬೆಂಗಳೂರು ನಗರ ಜಿಲ್ಲೆಯಲ್ಲಿ ಎಷ್ಟು ಎಕರೆ ಸರ್ಕಾರಿ ಜಮೀನಿದೆ; (ತಾಲ್ಲೂಕುವಾರು, ಹೋಬಳಿವಾರು, ಗ್ರಾಮವಾರು, ಸರ್ವೆ ನಂಬರ್‌ಗಳ ಸಮೇತ ವಿವರ ನೀಡುವುದು) ಈ ಸರ್ಕಾರಿ ಜಮೀನಿನಲ್ಲಿ ಎಷ್ಟು ಎಕರೆ ಜಮೀನು ಒತ್ತುವರಿಯಾಗಿದೆ; ಒತ್ತುವರಿಯಾಗಿರುವ ಜಮೀನನ್ನು ತೆರವುಗೊಳಿಸಿ ಸರ್ಕಾರದ ವಶಕ್ಕೆ ಪಡೆದಿದೆಯೇ: (ವಿವರ ನೀಡುವುದು) | ಬೆಂಗಳೂರು ನಗರ ಜಿಲ್ಲೆಯಲ್ಲಿ ಒಟ್ಟು 122918-10 ಎಕರೆ/ಗುಂಟೆ ಸರ್ಕಾರಿ ಜಮೀನಿರುತ್ತದೆ. ವಿವರಗಳನ್ನು **ಅನುಬಂಧ-2ರಲ್ಲಿ** ನೀಡಿದೆ.<br><br>ಬೆಂಗಳೂರು ನಗರ ಜಿಲ್ಲೆಯಲ್ಲಿ ಒಟ್ಟು 33877-09.11 ಎಕರೆ/ಗುಂಟೆ ಜಮೀನಿನ ಒತ್ತುವರಿಯಾಗಿದ್ದು, ಈ ಪೈಕಿ ರಸ್ತೆ & ಉದ್ಯಾನವನಗಳಂತಹ ಸಾರ್ವಜನಿಕ ಉದ್ದೇಶಗಳಿಗೆ ಹಾಗೂ ನಮೂನೆ-50 ಮತ್ತು 53ರಡಿ 16474-29 ಎಕರೆ/ಗುಂಟೆ ಜಮೀನು ಬಳಕೆಯಾಗಿರುತ್ತದೆ. ಉಳಿದ 17403-20.11 ಎಕರೆ/ಗುಂಟೆ ಜಮೀನಿನ ಪೈಕಿ ಈಗಾಗಲೇ 16102-17 ಎಕರೆ/ಗುಂಟೆ ಜಮೀನಿನ ಒತ್ತುವರಿಯನ್ನು ತೆರವುಗೊಳಿಸಲಾಗಿದೆ. |
| ಊ) | ಮೇಲ್ಕಂಡ ವಿಷಯದ ಬಗ್ಗೆ ಕಳೆದ 4 ವರ್ಷಗಳಿಂದ ಪ್ರತಿ ಅಧಿವೇಶನದಲ್ಲೂ ಪ್ರಶ್ನೆ ಕೇಳಿದರೂ ಸಹ ಇದುವರೆಗೂ ಉತ್ತರ ನೀಡದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ? | ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ ಅಧಿವೇಶನದಲ್ಲಿ ಕೇಳಲಾಗಿರುವ ಪ್ರಶ್ನೆಗಳಿಗೆ ಉತ್ತರಿಸಲಾಗುತ್ತಿದೆ. |

**ಸಂಖ್ಯೆ: ಆರ್‌ಡಿ 03 ಎಲ್‌ಜಿಕ್ಯೂ 2020**

(ಆರ್.ಅಶೋಕ)
ಕಂದಾಯ ಸಚಿವರು

ಅನುಬಂಧ – I

# ಕರ್ನಾಟಕ ಸಾರ್ವಜನಿಕ ಜಮೀನುಗಳ ನಿಗಮ ನಿಯಮಿತ

2ನೇ ಮಹಡಿ, ಜಿಲ್ಲಾಧಿಕಾರಿಗಳ ಕಛೇರಿ ಕಟ್ಟಡ, ಕಂದಾಯ ಭವನ ಹಿಂಬಾಗ, ಕೆಂಪೇಗೌಡ ರಸ್ತೆ
ಬೆಂಗಳೂರು.560 009 ದೂ: 080 22114233, 22133558

| S.NO | DISTRICT | ರಾಜ್ಯದಲ್ಲಿರುವ ಜಿಲ್ಲಾವಾರು ಒಟ್ಟು ಸರ್ಕಾರಿ ಜಮೀನು | ಒತ್ತುವರಿ ಮಾಡಿಕೊಂಡಿರುವವರ ಸಂಖ್ಯೆ / ಜಿಲ್ಲಾವಾರು ಪ್ರಕರಣಗಳು | ಒತ್ತುವರಿ ಮಾಡಿಕೊಂಡಿರುವ ಒಟ್ಟು ಪ್ರದೇಶ (ಎಕರೆ/ಗುಂಟೆ) |
|---|---|---|---|---|
| 1 | BANGALORE URBAN | 122918.10 | 32613 | 33877.9.11 |
| 2 | BANGALORE RURAL | 108295.00 | 8647 | 9433.00 |
| 3 | BIDAR | 90294.00 | 764 | 30505.00 |
| 4 | BELAGAVI | 130415.24 | 2604 | 5207.20 |
| 5 | BIJAPUR | 43411.01 | 1751 | 1530.27 |
| 6 | BELLARY | 684505.72 | 19037 | 44129.26 |
| 7 | BAGALKOTE | 22734.23 | 6395 | 1547.22 |
| 8 | CHITRADURGA | 472752.20 | 14149 | 25350.28 |
| 9 | CHIKKAMAGALUR | 392040.16 | 34595 | 72895.32 |
| 10 | CHIKKABALLAPURA | 370415.25 | 6191 | 9379.04 |
| 11 | CHAMARAJA NAGARA | 144627.29 | 1830 | 3263.19 |
| 12 | DHARAWAD | 57577.00 | 2944 | 5281.02 |
| 13 | DAVANAGERE | 136160.13 | 1044 | 2493.26 |
| 14 | DAKSHINA KANNADA | 560510.50 | 350 | 2598.31 |
| 15 | KALABURAGI | 81803.39 | 1719 | 13627.28 |
| 16 | GADAG | 94746.33 | 112 | 1351.30 |
| 17 | HAVERI | 111169.27 | 8359 | 83284.00 |
| 18 | HASAN | 142009.02 | 34519 | 31565.37 |
| 19 | KOPPAL | 110096.20 | 1583 | 4232.01 |
| 20 | KODAGU | 126875.82 | 1847 | 5251.38 |
| 21 | KOLAR | 314822.68 | 8382 | 22279.20 |
| 22 | MANDYA | 205021.00 | 9662 | 8671.00 |
| 23 | MYSORE | 115994.02 | 6992 | 34652.00 |
| 24 | RAICHUR | 128453.22 | 178 | 10204.07 |
| 25 | RAMANAGAR | 34958.09 | 2517 | 2489.15 |
| 26 | SHIVAMOGGA | 312627.31 | 2126 | 5539.09 |
| 27 | TUMAKURU | 633098.00 | 5660 | 11111.01 |
| 28 | UTTARA KANNADA | 17098.37 | 1443 | 2318.01 |
| 29 | UDUPI | 259868.39 | 8087 | 4625.19 |
| 30 | YADAGIRI | 37036.21 | 2572 | 4745.24 |
| | **TOTAL ACRES** | **6062333.15** | **228672** | **459558.27.11** |

ತಮ್ಮ ವಿಶ್ವಾಸಿ,

ಪ್ರಧಾನ ವ್ಯವಸ್ಥಾಪಕರು,
ಕರ್ನಾಟಕ ಸಾರ್ವಜನಿಕ ಜಮೀನುಗಳ ನಿಗಮ ನಿ.

2/3/20